ಲೋಕಶಿಕ್ಷಣ ನಿರ್ದೇಶನಾಲಯ

ನವಸಾಕ್ಷರ ಪುಸ್ತಕ ಮಾಲೆ - ೭೬

# ಕುವೆಂಪು ವಿಚಾರಗಳು



ಡಾ. ರಹಮತ್ ತರೀಕೆರೆ






ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ-೫೮೩ ೨೧೧

KUVEMPU VICHARAGALU : By Dr. Rahamath Tarikere. Published by The Director of Prasaranga, Kannada University, Hampi - 583 211, KARNATAKA.
First Impression 1994, Pp. i i + 26, Rs. 8.00.

---



**ಸಂಯೋಜನಾಧಿಕಾರಿ**
ಎಚ್. ಎಸ್. ಶ್ರೀಮತಿ
ಪಠ್ಯ ಪುಸ್ತಕ ರಚನಾ ವಿಭಾಗ



**ಪ್ರಕಾಶಕರು**
ನಿರ್ದೇಶಕರು
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ - ೫೮೩ ೨೧೧

**ಮುಖಪುಟ ವಿನ್ಯಾಸ**
ಕೆ. ಮಕಾಳಿ

ಬೆಲೆ : ರೂ. ೮.೦೦

**ಮುದ್ರಕರು**
ಗುರುದತ್ ಪ್ರಿಂಟರ್ಸ್
೯೧, ೪ನೇ ಕ್ರಾಸ್, ೧ನೇ ಮೇನ್
ನ್ಯೂ ಟಿಂಬರ್‌ಯಾರ್ಡ್ ಲೇಔಟ್
ಮೈಸೂರು ರಸ್ತೆ
ಬೆಂಗಳೂರು ೫೬೦ ೦೨೬



# ಕುವೆಂಪು ವಿಚಾರಗಳು

**ಕುವೆಂಪು ಯಾರು ?**

ಕುವೆಂಪು ಕನ್ನಡದ ಒಬ್ಬ ದೊಡ್ಡ ಕವಿ. ಕುವೆಂಪು ಎಂದರೆ ಕುಪ್ಪಳಿ ವೆಂಕಟಪ್ಪನವರ ಮಗ ಪುಟ್ಟಪ್ಪ. ಪುಟ್ಟಪ್ಪನವರು ಬರೆದಿದ್ದು ಕುವೆಂಪು ಎಂಬ ಹೆಸರಲ್ಲಿ. ಅವರ ತಾಯಿ ಹೆಸರು ಸೀತಮ್ಮ. ಕುವೆಂಪು ಹುಟ್ಟಿದ್ದು ಸಾವಿರದ ಒಂಬೈನೂರಾನಾಲ್ಕರಲ್ಲಿ. ಚಿಕ್ಕಮಗಳೂರು ಜಿಲ್ಲೆಯ ಹಿರೇಕೂಡಿಗೆ ಎಂಬ ಹಳ್ಳಿಯಲ್ಲಿ. ಹಿರೇಕೂಡಿಗೆ ಅವರ ತಾಯಿಯ ತವರುಮನೆ. ಕುವೆಂಪು ಬೆಳೆದಿದ್ದು ಕುಪ್ಪಳಿಯಲ್ಲಿ. ಕುಪ್ಪಳಿಯು ಅವರ ತಂದೆಯ ಊರು. ಇದು ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲೂಕಿನ ಒಂದು ಹಳ್ಳಿ. ಬೆಟ್ಟ, ಕಾಡು, ನದಿಗಳಿಂದ ಕೂಡಿದ ಮಲೆನಾಡಿನಲ್ಲಿ ಕುಪ್ಪಳಿಯಿದೆ.

ಕುವೆಂಪು ಮೈಸೂರಿನಲ್ಲಿ ಓದಿದರು. ಮಹಾರಾಜಾ ಕಾಲೇಜಿನಲ್ಲಿ ಪಾಠ ಹೇಳಿದರು. ಮುಂದೆ ಮೈಸೂರು ವಿಶ್ವವಿದ್ಯಾಲಯದ ಮುಖ್ಯಸ್ಥರಾದರು. ತೊಂಬತ್ತು ವರುಷ ದಾಟಿರುವ ಕುವೆಂಪು ಈಗ ಮೈಸೂರಿನಲ್ಲಿ ವಾಸವಾಗಿದ್ದಾರೆ.

ಕುವೆಂಪು ಹೆಸರಾಗಿರುವುದು ತಮ್ಮ ಬರವಣಿಗೆಯಿಂದ. ಅವರು ಕತೆ, ಕವನ, ಕಾದಂಬರಿಗಳನ್ನು ಬರೆದಿದ್ದಾರೆ. ನಾಡಿನಲ್ಲಿ ಸಂಚರಿಸಿ ಭಾಷಣ ಮಾಡಿದ್ದಾರೆ. ಕುವೆಂಪು ಅವರ ವಿಚಾರಗಳು ಅವರ ಕತೆ ಕವನಗಳಲ್ಲಿ ಇವೆ. ಅದೇ ರೀತಿ ಅವರ ಭಾಷಣಗಳಲ್ಲೂ ಇವೆ. ಕುವೆಂಪು ಧೈರ್ಯದಿಂದ ಮೂಢನಂಬಿಕೆಗಳನ್ನು ವಿರೋಧಿಸಿದ ಕವಿ. ನಮ್ಮ ಸಮಾಜದಲ್ಲಿ ಅನೇಕ ದೋಷಗಳಿವೆ. ಆ ದೋಷಗಳು ಹೋಗಬೇಕು. ನಮ್ಮ ಸಮಾಜ ಬದಲಾಗಬೇಕು. ಇದೇ ಕುವೆಂಪು ವಿಚಾರಗಳ ಉದ್ದೇಶ. ಈ ಕಾರಣದಿಂದ ಸಹ ಕುವೆಂಪು ನಮ್ಮ ಮುಖ್ಯ ಕವಿ ಆಗಿದ್ದಾರೆ.

ಈ ಪುಸ್ತಕದಲ್ಲಿ ಕುವೆಂಪು ಅವರ ವಿಚಾರಗಳನ್ನು ತಿಳಿಸುವ ಪ್ರಯತ್ನ ಮಾಡಿದೆ.

## ಬಿಳಿಯರು ಕೊಟ್ಟ ವರ

ಬ್ರಿಟಿಷರು ನಮ್ಮನ್ನು ಇನ್ನೂರು ವರ್ಷ ಆಳಿದರು. ನಮ್ಮನ್ನು ಗುಲಾಮರಾಗಿ ನಡೆಸಿಕೊಂಡರು. ಆದರೆ ಅವರು ನಮಗೆ ವಿದ್ಯೆ ಕೊಟ್ಟರು. ನಾವು ವಿಚಾರ ಮಾಡುವುದಕ್ಕೆ ಮುಖ್ಯ ಕಾರಣ, ಬ್ರಿಟಿಷರ ವಿದ್ಯಾಭ್ಯಾಸ. ಬ್ರಿಟಿಷರು ನಮ್ಮ ದೇಶಕ್ಕೆ ಬಂದಾಗ ಅವರ ವಿದ್ಯಾಭ್ಯಾಸವೂ ಬಂದಿತು. ಆಗ ಎಲ್ಲರಿಗೂ ಶಾಲೆಗೆ ಹೋಗಿ ಕಲಿಯಲು ಸಾಧ್ಯವಾಯಿತು. ಹೀಗೆ ಶಾಲೆ ಕಲಿತವರು ಬೇರೆ ತರ ಆಲೋಚನೆ ಶುರುಮಾಡಿದರು. ಅವರಿಗೆ ನಮ್ಮ ಸಮಾಜದ ಅನೇಕ ಕಾಯಿಲೆಗಳು ಕಂಡವು. ಧರ್ಮದ ಹೆಸರಿನಲ್ಲಿ ನಡೆಯುವ ಅನ್ಯಾಯಗಳು ಕಂಡವು. ಇದನ್ನು ಇಂಗ್ಲೀಷ್ ವಿದ್ಯಾಭ್ಯಾಸ ಪಡೆದ ಜನ ವಿರೋಧಿಸಿದರು. ಅಂಥವರಲ್ಲಿ ಕುವೆಂಪು ಒಬ್ಬರು.

ಅವರು ಹೀಗೆ ಹೇಳುತ್ತಾರೆ :' ಬ್ರಿಟಿಷರು ಬರದಿದ್ದರೆ ಕೆಳಜಾತಿಯ ಜನರು ಸಗಣಿಬಾಚಿಕೊಂಡು ಬಿದ್ದಿರಬೇಕಾಗಿತ್ತು. ಹೊಲಗದ್ದೆಗಳಲ್ಲಿ ದನಗಳಂತೆ ಕೆಲಸಮಾಡಿಕೊಡೇ ಬಾಳಬೇಕಾಗಿತ್ತು. ಜಾತಿ ಮತದ ಕೆಸರಲ್ಲಿ ಒದ್ದಾಡಬೇಕಿತ್ತು. ಬ್ರಿಟಿಷರು ಕೊಟ್ಟ ವಿದ್ಯೆಯಿಂದ ವಿಚಾರ ಮಾಡುವ ಶಕ್ತಿ ಬಂತು.'

## ದೇವರ ಹೆಸರಿನ ಅನ್ಯಾಯಗಳು

ಕುವೆಂಪು ಅವರು ಗುಡಿಗಳಿಗೆ ಹೋಗಲಿಲ್ಲ. ಮಠಗಳಿಗೆ ಹೋಗಲಿಲ್ಲ. ಸ್ವಾಮಿಗಳ ಕಾಲಿಗೆ ಬೀಳಲಿಲ್ಲ. ಅವರು ದೇವರಿಗೆ ಗುಡಿಕಟ್ಟುವುದನ್ನೇ ವಿರೋಧಿಸಿದರು. ನಿಜವಾದ ದೇವರು ಗುಡಿ ಮಸೀದಿಗಳಲ್ಲಿ ಇರುವುದಿಲ್ಲ. ದೇವರು ನಮ್ಮ ನಮ್ಮ ಒಳಗೆ ಇರುತ್ತಾನೆ. ಎದೆಯೊಳಗಿನ ಪ್ರೀತಿಯೇ ದೇವರು ಎಂಬುದು ಕುವೆಂಪು ನಂಬಿಕೆ. 'ಗುಡಿ ಚರ್ಚು ಮಸಜೀದಿಗಳ ಬಿಟ್ಟು ಹೊರ ಬನ್ನಿ' ಎಂದು ಅವರು ಜನರಿಗೆ ಹೇಳುತ್ತಾರೆ. ದೇವರ ಹೆಸರಲ್ಲಿ ಕೂಡಿಬಾಳುವ ಜನರಲ್ಲಿ ಭೇದ ಹುಟ್ಟಿಸುವವರು ಇರುತ್ತಾರೆ. ಧರ್ಮದ ಹೆಸರಿನಲ್ಲಿ ಜನರ ಮನಸ್ಸನ್ನು ಒಡೆಯುವವರು ಇರುತ್ತಾರೆ. ಅವರಿಗೆ ಕುವೆಂಪು ಅವರ ಈ ಮಾತುಗಳು ಗೊತ್ತಾಗಬೇಕು.

ದೇವಾಲಯ ಕಟ್ಟುವವರು ಜನರ ಬಡತನ ತಿಳಿಯುವುದಿಲ್ಲ. ಬಡವರ ಹೊಟ್ಟೆಹೊಡೆದು ಅವರು ಗುಡಿಕಟ್ಟುತ್ತಾರೆ. ಇದು ಕುವೆಂಪು ಅಭಿಪ್ರಾಯ. ಆಗ ದೇವರೇ ಮನಸಲ್ಲಿ ಅಂದುಕೊಳ್ಳುತ್ತಾನೆ:

ಬಡಬಗ್ಗರ ಗುಡಿಸಲುಗಳ ಮುರಿದು
ಗುಡಿಗಳ ಕಟ್ಟುವರೆನಗಾಗಿ

ಹಾಗಾದರೆ ದೇವರು ಎಲ್ಲಿರುತ್ತಾನೆ ? ಕುವೆಂಪು ಹೇಳುತ್ತಾರೆ:'ನಮ್ಮ ನಮ್ಮ ದುಡಿಮೆಗಳಲ್ಲಿ ದೇವರು ಇರುತ್ತಾನೆ'. ಕುವೆಂಪು 'ಜಲಗಾರ' ಎಂಬ ನಾಟಕ ಬರೆದಿದ್ದಾರೆ. ಜಲಗಾರ ಎಂದರೆ ಊರನ್ನು ಗುಡಿಸುವವನು. ಆ ಜಲಗಾರ ಹೇಳುತ್ತಾನೆ,

ನನ್ನ ಶಿವನೀ ಮಣ್ಣಿನಲ್ಲಿಹನು

ನನ್ನ ಶಿವ ಕೊಳೆತ ಕಸದೊಳಗಿಹನು

ಕರ್ಪುರದೊಳಿಲ್ಲ.

## ಮತ

ಕುವೆಂಪು ಅವರಿಗೆ ಮತಗಳ ಮೇಲೆ ಬಹಳ ಸಿಟ್ಟು. ಯಾಕೆಂದರೆ ಮತಗಳು ಲೋಕಕ್ಕೆ ಸಹಾಯ ಮಾಡಿರುವುದು ಕಡಿಮೆ. ಕೆಡುಕು ಮಾಡಿರುವುದೇ ಹೆಚ್ಚು. ಮತಗಳೇ ನಮ್ಮ ನಾಶಕ್ಕೆ ಕಾರಣ ಎಂಬುದು ಕುವೆಂಪು ತಿಳಿವಳಿಕೆ. ಮತ ಎಂಬ ತಾಯಿ ಹೆತ್ತಮಕ್ಕಳೇ ಜಾತಿ, ಕೋಮುಗಳು. ಮತ ಜನರ ಮನಸ್ಸನ್ನು ಕೆಡಿಸಿವೆ. ಮತ ಎಂಬುದು ನಾಡಿನ ಕುತ್ತಿಗೆಯ ಉರುಳಾಗಿದೆ. ಮತ ಎಂದರೆ ನಾವು ಬೇರೆ ನೀವು ಬೇರೆ ಎನ್ನುವ ಕಟ್ಟುಪಾಡುಗಳು. ಮತದ ಹೆಸರಲ್ಲಿ ಜನ ಒಬ್ಬರಿಂದ ಮುಟ್ಟಿಸಿಕೊಳ್ಳುವುದಿಲ್ಲ. ಬೇರೆಯವರ ಜತೆ ಊಟಮಾಡುವುದಿಲ್ಲ. ಕೆರೆಬಾವಿಗಳಿಗೆ ದಲಿತರನ್ನು ಬಿಡಿಸಿಕೊಳ್ಳುವುದಿಲ್ಲ. ಗುಡಿಯೊಳಗೆ, ಮನೆಯೊಳಗೆ ಅವರು ಬರಬಾರದು ಎನ್ನುತ್ತಾರೆ. ಮತಗಳು ಇರುವ ತನಕ ಸಮಾನತೆ ಬರುವುದಿಲ್ಲ. ಮತದಿಂದ ಬೇರೆ ಬೇರೆ ಜನ ಬೆರೆಯುವುದಿಲ್ಲ. ಮತದ ನಂಬಿಕೆಗಳಿಂದ ಧರ್ಮಗಳು ಕೆಳಮಟ್ಟಕ್ಕೆ ಹೋಗಿವೆ. ಮತಗಳು ಇಲ್ಲವಾಗಬೇಕು. ಇದು ಕುವೆಂಪು ಅವರ ಖಚಿತ ಅಭಿಪ್ರಾಯ

ಹಳೆ ಮತದ ಕೊಳೆಯೆಲ್ಲ

ಹೊಸಮತಿಯ ಹೊಳೆಯಲ್ಲಿ ಕೊಚ್ಚಿಹೋಗಲಿ

ಎನ್ನುತ್ತಾರೆ ಅವರು.

## ಪುರೋಹಿತರು - ಮೂಢನಂಬಿಕೆ

ಕುವೆಂಪು ಪುರೋಹಿತರ ವಿಷಯದಲ್ಲಿ ಕಟುವಾಗಿ ಮಾತಾಡುತ್ತಾರೆ. ಯಾಕೆಂದರೆ ಕೆಟ್ಟ ನಂಬಿಕೆಗಳನ್ನು ಜೀವಂತ ಇಟ್ಟವರೇ ಪುರೋಹಿತರು. ಪುರೋಹಿತರು ತುಂಬ ಅಪಾಯಕಾರಿ. ಜನರ ದಡ್ಡತನವೇ ಅವರ ಬಂಡವಾಳ. ಈ ಪುರೋಹಿತರು



ಪುರೋಹಿತರು – ಮೂಢ ನಂಬಿಕೆಗಳು ತೊಲಗಬೇಕು

ಹೊಟ್ಟೆತುಂಬಿಸಿಕೊಳ್ಳಲು ಜನರಿಗೆ ಮೋಸ ಮಾಡುತ್ತಾರೆ. ಸುಳ್ಳುಶಾಸ್ತ್ರ ಹೇಳುತ್ತಾರೆ. ಜನ ಕಾಯಿಲೆ ಬಂದಾಗ ಆಸ್ಪತ್ರೆಗೆ ಹೋಗುವುದಿಲ್ಲ. ಜೋಯಿಸರ ಹತ್ತಿರ ಹೋಗುತ್ತಾರೆ. ನಿಮಿತ್ತ ಕೇಳುತ್ತಾರೆ. ಆಗ ಜೋಯಿಸರು ತಾಯಿತ ಕೊಡುತ್ತಾರೆ. ಬೂದಿ ಕೊಡುತ್ತಾರೆ. ಪೂಜೆ ಮಾಡಿಸುತ್ತಾರೆ. 'ದಾನ ಮಾಡಬೇಕು' ಎಂದು ದಾನ ಮಾಡಿಸುತ್ತಾರೆ. ಆದರೆ ಕಾಯಿಲೆಗೆ ಸರಿಯಾದ ಔಷಧಿ ಸಿಗುವುದಿಲ್ಲ. ಆಗ ಜನರ ಪ್ರಾಣ ಹೋಗುತ್ತದೆ.

ಪುರೋಹಿತರು ಎಲ್ಲ ದೇಶಗಳಲ್ಲೂ ಇರುತ್ತಾರೆ. ಎಲ್ಲ ಮತಗಳಲ್ಲೂ ಇರುತ್ತಾರೆ. ವಿಚಾರ ಮಾಡುವುದಕ್ಕೆ ಪುರೋಹಿತರು ವಿರೋಧ ಮಾಡುತ್ತಾರೆ. ಜನ ವಿದ್ಯೆ ಕಲಿತರೆ ವಿಚಾರ ಮಾಡುತ್ತಾರೆ. ಪುರೋಹಿತರ ಮಾತು ಕೇಳುವುದಿಲ್ಲ. ಆಗ ಪುರೋಹಿತರ ನಾಶವಾಗುತ್ತದೆ. ಕತ್ತಿಯಿಂದಲ್ಲ. ವಿದ್ಯೆಯಿಂದ, ವಿಚಾರದಿಂದ. ಪ್ರಶ್ನೆಮಾಡುವುದರಿಂದ ವಿಚಾರಶಕ್ತಿ ಬರುತ್ತದೆ. ವಿಚಾರಮಾಡುವುದು ನಮ್ಮ ಹಕ್ಕು.

## ವಿದ್ಯಾವಂತರೆಲ್ಲ ವಿಚಾರವಂತರೇ ?

ದುರಂತವೆಂದರೆ ವಿದ್ಯಾವಂತರೆಲ್ಲ ವಿಚಾರವಂತರಲ್ಲ. ತುಂಬ ಕಲಿತವರಲ್ಲೂ ಅಜ್ಞಾನವಿದೆ. ಮೂಢನಂಬಿಕೆಗಳಿವೆ. ಕಾಲೇಜುಗಳಲ್ಲಿ ಕಲಿಸುವ ವಿದ್ಯಾವಂತರಲ್ಲೂ ಮೂಢನಂಬಿಕೆಯಿದೆ. ಅವರು ವ್ರತ ಮಾಡಿಸುತ್ತಾರೆ. ಯಾಗ ಮಾಡಿಸುತ್ತಾರೆ. ಇಂಥವರು ಮಕ್ಕಳಿಗೆ ವಿಜ್ಞಾನ ಪಾಠ ಮಾಡುತ್ತಾರೆ. ಆದರೆ ಮನೆ ಬಿಡುವಾಗ ರಾಹುಕಾಲ ಎಂದು ಪಂಚಾಂಗ ನೋಡುತ್ತಾರೆ. ತರಗತಿಗಳಲ್ಲಿ ಸಮಾಜ ಶಾಸ್ತ್ರವನ್ನು ಪಾಠ ಮಾಡುತ್ತಾರೆ. ತಮ್ಮ ಮಕ್ಕಳು ಬೇರೆ ಜಾತಿಯವರನ್ನು ಮದುವೆಯಾಗುತ್ತೇನೆಂದರೆ ಸಿಡಿದೇಳುತ್ತಾರೆ. ಇಂಥವೆಷ್ಟೋ! ಬ್ರಿಟೀಷರು ಇನ್ನೂರು ವರ್ಷ ಆಳಿದರು. ಅವರಿಂದ ಯಂತ್ರ ನಡೆಸುವುದನ್ನು ಕಲಿತೆವು. ಆದರೆ ವಿಚಾರಬುದ್ಧಿ ಹೆಚ್ಚಾಗಿ ಬರಲಿಲ್ಲ. ಕಲಿಯಬೇಕಾದಷ್ಟು ಕಲಿಯಲಿಲ್ಲ. ಹೀಗೆಂದು ಕುವೆಂಪು ದುಃಖ ಪಡುತ್ತಾರೆ. 'ವಿಚಾರವಿಲ್ಲದವನ ಬುದ್ಧಿ ಸತ್ತ ಬುದ್ಧಿಯೇ ಸರಿ ' ಎನ್ನುತ್ತಾರೆ.

## ಶಾಸ್ತ್ರದೊಡ್ಡದೋ? ಮನುಷ್ಯತ್ವ ದೊಡ್ಡದೋ?

ಯಾವ ಕಾಲದ ಶಾಸ್ತ್ರ ಏನು ಹೇಳಿದರೇನು?

ಎದೆಯ ದನಿಗೂ ಮಿಗಿಲು ಶಾಸ್ತ್ರ ಇಹುದೇನು?

ಯಾವುದೋ ಒಂದು ಕಾಲಕ್ಕೆ ಶಾಸ್ತ್ರಗಳನ್ನು ಮಾಡಿರುತ್ತೆ. ಅವನ್ನು ಎಲ್ಲಾ

ಕಾಲಕ್ಕೂ ಅನುಸರಿಸಬೇಕೇ? ಇಲ್ಲ. ಮನುಷ್ಯತ್ವ ಹೇಳಿಕೊಡದ ಶಾಸ್ತ್ರಗಳು ಇದ್ದರೇನು, ಹೋದರೇನು? ಮನುಷ್ಯರನ್ನು ಪ್ರೀತಿಸುವುದಕ್ಕೆ ಹೇಳದ ಶಾಸ್ತ್ರಗಳನ್ನು ತಿರಸ್ಕರಿಸಬೇಕು. ಹೊಳೆನೀರಿನಲ್ಲಿ ಮಗು ಮುಳುಗುತ್ತಿದೆ. ಮೊದಲು ಮಗುವನ್ನು ಕಾಪಾಡಬೇಕು. 'ಇದು ಹೊಲೆಯರ ಮಗುವೇ? ಇದನ್ನು ಮುಟ್ಟಿದರೆ ಏನಾಗುತ್ತದೆ ?" ಶಾಸ್ತ್ರ ಹೀಗೆ ಯೋಚಿಸಲು ಹೇಳಬಹುದು. ಶಾಸ್ತ್ರಗಳು ಯಾವಾಗಲೂ ಮನಸಲ್ಲಿ ಸಣ್ಣತನ ಬೆಳೆಸುತ್ತವೆ. ಅಂಥ ಶಾಸ್ತ್ರಗಳನ್ನು ಎತ್ತಿ ಬಿಸಾಡಬೇಕು.

## ಯುವಕರಿಗಾಗಿ ವಿಚಾರ

ಕುವೆಂಪು ತಮ್ಮ ವಿಚಾರಗಳನ್ನು ಯುವಕರಿಗಾಗಿಯೇ ಹೇಳುತ್ತಾರೆ. ಯಾಕೆಂದರೆ ಯುವಕರಲ್ಲಿ ಹೊಸಮನಸ್ಸು ಇರುತ್ತದೆ. ಧೈರ್ಯ ಉತ್ಸಾಹ ಇರುತ್ತದೆ. ಬದಲಾವಣೆ ಮಾಡುವ ಶಕ್ತಿಯಿರುತ್ತದೆ. ವಯಸ್ಸಾದವರನ್ನು ಬದಲಾಯಿಸುವುದು ಕಷ್ಟ.



ಯುವಕರಿಗೆ ಕರೆ

ಯುವಕರು ಯಾರ ಭಯವಿಲ್ಲದೆ, ಆಲೋಚನೆ ಮಾಡಬೇಕು. ಹೀಗೆಂದು ಕುವೆಂಪು ಮತ್ತೆ ಮತ್ತೆ ಹೇಳುತ್ತಾರೆ. ಯಾವಾಗಲೂ ಸಂಪ್ರದಾಯಗಳು ಬಲವಾಗಿರುತ್ತವೆ. ತಾವು ಹೇಳುವಂತೇ ಆಲೋಚನೆ ಮಾಡಬೇಕು ಎನ್ನುತ್ತವೆ. ಸ್ವತಂತ್ರ ಆಲೋಚನೆ ಮಾಡಲು ಕೊಡುವುದಿಲ್ಲ. ಆನೆಗೆ ಅಂಕುಶ ಹಾಕಿದಂತೆ, ಬುದ್ಧಿಗೆ ಕಡಿವಾಣ ಹಾಕುತ್ತವೆ. ಆದರೆ ಮತಿಗೆ ಕಡಿವಾಣ ಇರಬಾರದು. ಅದು ಯಾರ ಅಡ್ಡಿಯೂ ಇಲ್ಲದಂತೆ ಸ್ವತಂತ್ರವಾಗಿರಬೇಕು. ಸ್ವತಂತ್ರವಾಗಿ ಎಂದರೆ ಬೇಕಾಬಿಟ್ಟಿಯಾಗಿ ಎಂದಲ್ಲ. ತಮಗೂ ಒಳ್ಳೆಯದಾಗಬೇಕು. ಸುತ್ತಲ ಸಮಾಜಕ್ಕೂ ಒಳ್ಳೆಯದಾಗಬೇಕು. ಯುವಕರು ಆ ರೀತಿಯಲ್ಲಿ ಯೋಚಿಸಬೇಕು.



ಪ್ರಶ್ನೆ ಯಾಕೆ ಮಾಡಬೇಕು ?ಬುದ್ಧಿ ಮನುಷ್ಯರಲ್ಲಿ ಇರುವ ಬಲವಾದ ಆಯುಧ. ಈ ಆಯುಧ ದೇವರು ಮತ ನರಕಗಳ ಭಯದಿಂದ ಮೊಂಡಾಗಿದೆ. ಈ ಭಯಗಳನ್ನು ಮೀರಬೇಕು. ಭಯ ಮೀರಿದಾಗ ಧೈರ್ಯ ಬರುತ್ತದೆ. ಕೆಟ್ಟದನ್ನು ಪ್ರಶ್ನೆಮಾಡುವ ಧೈರ್ಯ ಬರುತ್ತದೆ. ಅದೇ ಮೂಢನಂಬಿಕೆಗಳನ್ನು ವಿರೋಧಿಸುವ ಧೈರ್ಯ.

ಕುವೆಂಪು ಯುವಕರಿಗೆ ಪ್ರಶ್ನೆ ಮಾಡಲು ಹೇಳಿಕೊಡುತ್ತಾರೆ. ಬೆಂಕಿಗೆ ತುಪ್ಪ ಹಾಕಿ ಯಾಗ ಮಾಡಿದರೆ ಒಳ್ಳೆಯದಾಗುತ್ತದೆಯೇ? ಪುರೋಹಿತನನ್ನೇ. ಬೆಂಕಿಗೆ ಹಾಕಿದರೆ ಇನ್ನೂ ಒಳ್ಳೆಯದು ಆಗುವುದಿಲ್ಲವೇ ? ರೋಗ ಬಂದರೆ ಮಂತ್ರ ಹಾಕಿಸುವುದು ಸರಿಯೇ ? ಆಗ ಆಸ್ಪತ್ರೆಗಳು ಯಾಕೆ ಬೇಕು ? ಜಪ ಮಾಡಿದರೆ ಮಳೆ ಬರುತ್ತದೆಯೇ? ಅಂಥವರನ್ನು ಮರಳುಗಾಡಿಗೆ ಕಳಿಸಿದರೆ ಮಳೆ ಬರಿಸುತ್ತಾರೆಯೇ ?

ಕುವೆಂಪು ದಲಿತ ಯುವಕರಿಗೆ ಹೇಳುತ್ತಾರೆ. 'ನಿಮ್ಮನ್ನು ಗುಡಿಗೆ ಬರಬಾರದು ಎಂದರೆ ಅದು ತಪ್ಪು. ಅಂಥ ಗುಡಿಯಲ್ಲಿ ದೇವರೇ ಇಲ್ಲ ಎಂದು

ತಿಳಿಯಿರಿ. ಗುಡಿಯ ಕಲ್ಲಿನಲ್ಲಿ ದೇವರು ಇರುತ್ತಾನೆಯೇ ?' ನೂರು ದೇವರನೆಲ್ಲ ನೂಕಾಚೆ ದೂರ ' ಎನ್ನುತ್ತಾರೆ. 'ಸತ್ತ ಕಲ್ಗಳ ಮುಂದೆ ಅತ್ತು ಕರೆದುದು ಸಾಕು' ಎನ್ನುತ್ತಾರೆ.

ದಲಿತರನ್ನು ಗುಡಿಗೆ ಬಿಡಿಸಿಕೊಳ್ಳದ ಧರ್ಮ ಕೆಟ್ಟಧರ್ಮ. ದಲಿತರನ್ನು ಮುಟ್ಟಿಸಿಕೊಳ್ಳದ ಧರ್ಮ ಕೆಟ್ಟಧರ್ಮ. ಅಂಥ ಧರ್ಮ ಮನುಷ್ಯಧರ್ಮ ಆಗಲಾರದು ಎನ್ನುತ್ತಾರೆ. ಕುವೆಂಪು ಅವರಿಗೆ ನಿಮ್ಮ ಧರ್ಮ ಯಾವುದು? ಎಂದರೆ 'ನನ್ನದು ಮನುಷ್ಯಧರ್ಮ, ನಾನು ವಿಶ್ವಮಾನವ' ಎನ್ನುತ್ತಾರೆ.

## ಶ್ರೀ ಸಾಮಾನ್ಯರು

ಕುವೆಂಪು ಸಮಾನತೆ ನೆಲೆಸಬೇಕು ಎಂದು ಬಯಸುವವರು. ಒಂದನೆಯದು ಮೇಲು-ಕೀಳಿನ ಜಾತಿ ಭಾವನೆ ತೊಲಗಿದ ಸಮಾನತೆ. ಎರಡನೆಯದು ಬಡವ-ಶ್ರೀಮಂತ ಎಂಬ ಅಂತರ ತೊಲಗಿದ ಸಮಾನತೆ. ಕೂಲಿಕಾರರ ಬಗ್ಗೆ ಬಡರೈತರ ಬಗ್ಗೆ ಅವರಿಗೆ ತುಂಬ ಕಳಕಳಿ. ಅವರ ಕತೆಗಳು ಬಡರೈತರ ಕಷ್ಟಗಳನ್ನು ಹೇಳುತ್ತವೆ. ಕುವೆಂಪು ರೈತರ ಕೂಲಿಕಾರರ ಸಂಕಟಗಳ ಬಗ್ಗೆ ತುಂಬ ಬರೆದಿದ್ದಾರೆ.

ಕುವೆಂಪು ಹಣವಂತರನ್ನು ಟೀಕಿಸುತ್ತಾರೆ. ಯಾಕೆಂದರೆ ಹಣವಂತರು ಬಡಜನರನ್ನು ಸುಲಿಯುತ್ತಾರೆ.'ಕೂಲಿಕಾರರ ರಕುತ ಧನಿಕರಿಗೆ ಕೂಳು' ಎಂದು ಕವಿ ಹೇಳುತ್ತಾರೆ.

ಕುವೆಂಪು ಪುರೋಹಿತರನ್ನು ಒಪ್ಪುವುದಿಲ್ಲ. ಯಾಕೆಂದರೆ ಅವರು ಅರಿಯದ ಜನರನ್ನು ವಂಚಿಸುತ್ತಾರೆ. ಮುಗ್ಧ ಜನರನ್ನು ದಾರಿತಪ್ಪಿಸುತ್ತಾರೆ.

ಕುವೆಂಪು ಆಳುವವರನ್ನು, ರಾಜರನ್ನು ವಿರೋಧಿಸುತ್ತಾರೆ. ಯಾಕೆಂದರೆ ಆಳುವವರು ಯಾವಾಗಲೂ ಪುರೋಹಿತರ ಗೆಳೆಯರು.



## ನೇಗಿಲ ಯೋಗಿ

ದೊರೆ ಮತ್ತು ಪುರೋಹಿತ
ಕೂಡಿದಾಗ ಹುಟ್ಟಿತು ಮತ
ಮೊದಲು ಠಕ್ಕ, ಮೊದಲ ಬೆಪ್ಪ
ಕೂಡಿದಾಗ ಮೂಡಿತು ಮತ

ನಿಜವಾದ ಭಾರತವು ಹಳ್ಳಿಗಳಲ್ಲಿ ಇದೆ. ಹಳ್ಳಿಯ ಜನರು ದುಡಿಯುತ್ತಾರೆ. ಆದರೆ ಹಳ್ಳಿಗರ ದುಡಿಮೆಯಿಂದ ನಗರಗಳ ಸಿಂಗಾರ ಮಾಡಲಾಗುತ್ತದೆ. ನಮ್ಮ ಸರ್ಕಾರಗಳು ಹಳ್ಳಿಗಳನ್ನು ಮರೆತುಬಿಟ್ಟಿವೆ. ದುಡಿವ ರೈತರ ಮಕ್ಕಳಿಗೆ ವಿದ್ಯಾಭ್ಯಾಸ ಇಲ್ಲ. ಒಬ್ಬ ರೈತ ಇಡೀ ನಾಡಿನ ಹಸಿವಿಗೆ ಊಟ ಕೊಡುವವನು. ಅವನು ನೇಗಿಲಯೋಗಿ ; ರೈತನೇ ನಿಜವಾದ ದೇಶಭಕ್ತ ; ಅವನು ಒಬ್ಬ ರಾಜಕಾರಣಿಗಿಂತ ದೊಡ್ಡವನು. ಒಬ್ಬ ವಿಜ್ಞಾನಿಗಿಂತ ಮುಖ್ಯ ಆದವನು. ಆದರೆ ಅವನ ಸ್ಥಿತಿ ಸತ್ತವನ ಸ್ಥಿತಿಯಾಗಿದೆ.

ಕರಿಯರದೋ ಬಿಳಿಯರದೋ ಯಾರದಾದರೆ ಏನು ?
ಸಾಮ್ರಾಜ್ಯ ಯಾವಾಗಲೂ ಸುಲಿಗೆ ರೈತನಿಗೆ !
ವಿಜಯನಗರವೋ ? ಮೊಗಲ ಆಳ್ವಿಕೆಯೋ ? ಇಂಗ್ಲೀಷರೋ ?
ಎಲ್ಲರೂ ಜಿಗಣೆಗಳೆ ನನ್ನ ನೆತ್ತರಿಗೆ !

## ಹಿಂದು - ಮುಸ್ಲಿಂ

ಕುವೆಂಪು ಹೇಳುತ್ತಾರೆ : ನಾವೆಲ್ಲ ನಮ್ಮ ಜಾತಿ-ಮತಗಳಿಗೆ ಅಂಟಿಕೊಂಡು ಸಣ್ಣವರಾಗಿದ್ದೇವೆ.'ಹಿಂದೂ' 'ಮುಸ್ಲಿಂ' ಎಂಬುದು ನಾವು ಮಾಡಿಕೊಂಡ ಭೇದಗಳು. ಎಲ್ಲರೂ ಮನುಷ್ಯರಾಗಿ ಹುಟ್ಟುತ್ತಾರೆ. ಅವರಿಗೆ ಆಮೇಲೆ ಹಿಂದು -ಮುಸ್ಲಿಂ ಎಂಬ ಅಂಗಿಯನ್ನು ಹಾಕಿಬಿಡುತ್ತೇವೆ. ನಾವೆಲ್ಲ ಮನುಷ್ಯರು ಎಂಬುದನ್ನು ಮರೆಯುತ್ತೇವೆ.



ಎಲ್ಲ ಧರ್ಮಗಳೂ ಒಂದೇ

ಒಬ್ಬರನ್ನು ಒಬ್ಬರು ದ್ವೇಷಿಸಲು, ನಮ್ಮ ತಪ್ಪುತಿಳಿವಳಿಕೆ ಕಾರಣ. ಈ ತಪ್ಪು ತಿಳಿವಳಿಕೆಗೆ ಕಾರಣ ತಪ್ಪು ಚರಿತ್ರೆ. ಇಂಥ ಚರಿತ್ರೆಯನ್ನು ಓದಿ ಮನಸ್ಸು ಕೆಡಿಸಿಕೊಂಡಿದ್ದೇವೆ.

ಹಿಂದೆ ರಾಜ-ರಾಜರ ನಡುವೆ ಯುದ್ಧ ನಡೆದಿದೆ. ಆದರೆ ಅದು ಎರಡು ಧರ್ಮಗಳ ನಡುವಿನ ಯುದ್ಧ ಅಲ್ಲ. ಯಾವ ಯುದ್ಧಗಳೂ ಜನರಿಗಾಗಿ ನಡೆದಿಲ್ಲ. ರಾಜರ ಅಧಿಕಾರ-ಸಂಪತ್ತಿನ ಆಸೆಗಾಗಿ ನಡೆದಿವೆ. ಚರಿತ್ರೆಯಲ್ಲಿ ಇದನ್ನು ಹಿಂದು-ಮುಸ್ಲಿಮರ ಜಗಳ ಎನ್ನಲಾಗಿದೆ. ಇದು ಸರಿಯಲ್ಲ. ತಪ್ಪು. ಹಾಗೆ ನೋಡಿದರೆ ಚರಿತ್ರೆಯಲ್ಲಿ ಹಿಂದು-ಮುಸ್ಲಿಂ ಸಂಸ್ಕೃತಿಗಳು ಬೆರೆತಿರುವುದು ಗೊತ್ತಾಗುತ್ತದೆ. ಅವು ಎರಡು ನದಿಗಳು ಬೆರೆತಂತೆ ಬೆರೆತಿವೆ. ಈ ದೇಶದ ಸಂಸ್ಕೃತಿಯನ್ನು ಎಲ್ಲ ಧರ್ಮಗಳ ಜನ ಬೆರೆತು ಬೆಳೆಸಿದ್ದಾರೆ. ಭಾರತ ನಾನಾ ಧರ್ಮಗಳ ತೋಟ ಇದ್ದಂತೆ ; ಭಾರತದ ಸಂಸ್ಕೃತಿ ಹಲವು ಹೂವಿನ ಹಾರದಂತಿದೆ. ಹಲವು ಹಕ್ಕಿಗಳು ಹಾಡಿದ ಹಾಡಿನಂತೆ ಇದೆ.

## ನಮ್ಮ ರಾಜಕಾರಣ-ಪ್ರಜಾಪ್ರಭುತ್ವ

ಕುವೆಂಪು ನೆಹರೂ ವಿಚಾರಗಳನ್ನು ಇಷ್ಟಪಡುತ್ತಾರೆ. ಗಾಂಧಿಯ ಸರಳತೆಯನ್ನೂ ಇಷ್ಟಪಡುತ್ತಾರೆ. ನೆಹರು ಧರ್ಮ-ದೇವರುಗಳ ಬಗ್ಗೆ ತಲೆ ಕೆಡಿಸಿಕೊಳ್ಳುತ್ತಿರಲಿಲ್ಲ. ವಿಜ್ಞಾನವನ್ನು ಇಷ್ಟಪಡುತ್ತಿದ್ದರು. ಜನರಿಗೆ ಕೆಲಸ ಕೊಡುವ ಅಣೆಕಟ್ಟು-ಕಾರ್ಖಾನೆಗಳೇ ದೇವಾಲಯ ಎನ್ನುತ್ತಿದ್ದರು. ಇದಕ್ಕಾಗಿ ಕುವೆಂಪುಗೆ ನೆಹರೂ ಬಗ್ಗೆ ಒಲವಿತ್ತು. ಗೌರವ ಇತ್ತು.



ಆದರೆ ಕೈಗಾರಿಕೆ ಬೇಕು ಎಂಬುದು ವಿಪರೀತದ ದಾರಿ ಹಿಡಿಯಿತು. ಆಗ ಕುವೆಂಪು ಗಾಂಧಿಯನ್ನು ನೆನೆಯುತ್ತಾರೆ. ಹಳ್ಳಿಗಳಲ್ಲಿ ಬಾವಿ ತೆಗೆಸುವುದು ಬಿಟ್ಟು ಕಾರು

ತಯಾರಿಸುವುದು ಏಕೆ ? ಎಂದು ಕೇಳುತ್ತಾರೆ. ಕೈಗಾರಿಕೆಯಿಂದ, ಬಡವರ ಹಣದಿಂದ, ನಗರಗಳು ಬೆಳೆದವು. ದೇಶದ ಸಂಪತ್ತನೆಲ್ಲ ರಾಜಕಾರಣಿಗಳು, ಸರ್ಕಾರಿ ನೌಕರರು ತಿನ್ನುವಂತಾಯಿತು. ವಿದ್ಯೆ ವಿಚಾರ ಕೊಡಬೇಕಿತ್ತು. ಬದಲಿಗೆ ಅದು ನೌಕರಿ ಹಿಡಿಯುವ ದಾರಿಯಾಗಿದೆ. ನೌಕರಿ ಸಿಕ್ಕಮೇಲೆ ವಿದ್ಯಾವಂತರು ಸ್ವಾರ್ಥಿಗಳಾಗಿದ್ದಾರೆ ಎಂಬುದು ಕುವೆಂಪು ಕೊರಗು.

ನಮ್ಮ ದೇಶದಲ್ಲಿ ಪ್ರಜಾಪ್ರಭುತ್ವ ಹೆಸರಿಗೆ ಮಾತ್ರ ಇದೆ. ಯಾಕೆಂದರೆ ಚುನಾವಣೆಗಳಲ್ಲಿ ಬಡವರು, ದುರ್ಬಲರು ನಿಲ್ಲಲು ಸಾಧ್ಯವಿಲ್ಲ. ನಿಂತು ಗೆಲ್ಲಲು ಸಾಧ್ಯವಿಲ್ಲ. ಓಟನ್ನು ಹಣ-ಹೆಂಡ ಚೆಲ್ಲಿ ಗಳಿಸಲಾಗುತ್ತಿದೆ. ಜಾತಿ-ಮತ ಹೇಳಿ ಓಟು ಪಡೆಯಲಾಗುತ್ತಿದೆ. ಹೀಗೆ ಗೆದ್ದ ರಾಜಕಾರಣಿಗಳಿಂದ ಜನರಿಗೆ ಒಳ್ಳೆಯದು ಆಗುತ್ತದೆಯೇ? ಈ ಸ್ಥಿತಿ ಬದಲಾವಣೆ ಆಗಬೇಕು. ಆಗದಿದ್ದರೆ ಪ್ರಜಾಪ್ರಭುತ್ವದಿಂದ ಸಾಮಾನ್ಯರಿಗೆ ಪ್ರಯೋಜನ ಇಲ್ಲ.

ನಮ್ಮ ದೇಶದ ಪ್ರಜಾಪ್ರಭುತ್ವ ಕೊಳಕಾಗಿದೆ. ಜಾತಿ- ಮತ, ಮೇಲು-ಕೀಳು ಹೋಗದ ತನಕ ನಿಜವಾದ ಪ್ರಜಾಪ್ರಭುತ್ವ ಸಾಧ್ಯವಿಲ್ಲ. ನಿಜವಾದ ಸಮಾಜವಾದ ಸಾಧ್ಯವಿಲ್ಲ. ನಿಜವಾದ ಸಮಾನತೆ ನೆಲೆಸುವುದಿಲ್ಲ. ಜನರ ಭಾಷೆಯಲ್ಲಿ ವಿದ್ಯೆಯನ್ನು, ಆಡಳಿತವನ್ನು ಸರ್ಕಾರ ಕೊಡಬೇಕು. ಇಲ್ಲದಿದ್ದರೆ ನಿಜವಾದ ಪ್ರಜಾಪ್ರಭುತ್ವ ಇರುವುದಿಲ್ಲ.

## ಕನ್ನಡ ಅಭಿಮಾನ

ಕುವೆಂಪು ಅವರಿಗೆ ಕನ್ನಡದ ಬಗ್ಗೆ ತುಂಬ ಪ್ರೀತಿ. 'ಕನ್ನಡಕೆ ಹೋರಾಡು ಕನ್ನಡದ ಕಂದ, ಕನ್ನಡವ ಕಾಪಾಡು ನನ್ನ ಆನಂದ' ಎಂದು ಹಾಡು ಬರೆದಿದ್ದಾರೆ.




ಬಾರಿಸು ಕನ್ನಡ ಡಿಂಡಿಮವ

ಹಿಂದೆ, ಕನ್ನಡದಲ್ಲಿ ಮಾತಾಡುವುದು ಅವಮಾನ ಎಂಬ ವಾತಾವರಣ ಇತ್ತು. ಈಗಲೂ ಅದು ಅಲ್ಲಲ್ಲಿ ಇದೆ ತಾನೇ? ಅಂಥ ವಾತಾವರಣದಲ್ಲಿ ಕನ್ನಡದ ಮೇಲೆ ಅಭಿಮಾನ ಹುಟ್ಟಿಸಬೇಕಿತ್ತು; ಕನ್ನಡದ ಬಗ್ಗೆ ಜನರನ್ನು ಎಚ್ಚರಿಸಬೇಕಿತ್ತು. ಕುವೆಂಪು ಈ ಕೆಲಸವನ್ನು ಮಾಡಿದರು.

ಮಕ್ಕಳು ವಿದ್ಯೆಯನ್ನು ತಮ್ಮ ತಾಯಿನುಡಿಯಲ್ಲೇ ಕಲಿಯಬೇಕು. ಕನ್ನಡದ ಮಗು ಕನ್ನಡದಲ್ಲಿ ಕಲಿಯಬೇಕು. ಇಂಗ್ಲೀಷ್ ಮೂಲಕ ಕಲಿತರೆ ವಿಷಯ ಪೂರ ತಿಳಿಯುವುದಿಲ್ಲ. ಯಾಕೆಂದರೆ ಅದು ನಮ್ಮ ಮನೆ ಮಾತಲ್ಲ. ಬೀದಿ ಮಾತಲ್ಲ. ಇಂಗ್ಲೀಷು ಬಳಸಿದರೆ ಕನ್ನಡ ಬೆಳೆಯುವುದಿಲ್ಲ ಎಂದು ಕುವೆಂಪು ಹೇಳಿದರು. ಕುವೆಂಪು

ಅವರು ಕಾಲೇಜುಗಳಲ್ಲಿ ಕನ್ನಡದಲ್ಲಿ ಕಲಿಯುವಂತೆ ಮಾಡಿದರು.

## ಇಂಗ್ಲಿಷ್ ವಿರೋಧ

ಕನ್ನಡದ ಮಕ್ಕಳಿಗೆ ಬಲವಂತವಾಗಿ ಇಂಗ್ಲೀಷ್ ಕಲಿಸುತ್ತಾರೆ. ಇದನ್ನು ಕುವೆಂಪು ಸಹಿಸುವುದಿಲ್ಲ. ಕಾರಣ, ಇಂಗ್ಲೀಷು ಬಿಳಿಯರ ಭಾಷೆ. ನಮ್ಮಲ್ಲಿ ಕೀಳುಭಾವನೆ ಬೆಳೆಸುತ್ತದೆ. ಇಂಗ್ಲೀಷನ್ನು ತುಂಬಾ ಕಷ್ಟಪಟ್ಟು ಕಲಿಸಲಾಗುತ್ತದೆ. ಇಂಗ್ಲೀಷನ್ನು ಕಲಿಯುವುದರಲ್ಲೇ ಮಕ್ಕಳ ಅರ್ಧ ಶಕ್ತಿ ಹಾಳಾಗುತ್ತದೆ. ಎಷ್ಟೇ ಕಷ್ಟಪಟ್ಟು ಕಲಿತರೂ, ಇಂಗ್ಲೀಷು ಪೂರಾ ದಕ್ಕುವುದಿಲ್ಲ. ಯಾಕೆಂದರೆ ಅದು ನಮ್ಮ ಮನೆಯ ಭಾಷೆ ಅಲ್ಲ. ಬೀದಿಯ ಜನರು ಆಡುವ ಮಾತಲ್ಲ. ಹಳ್ಳಿಯ ಮಕ್ಕಳಂತೂ ಇಂಗ್ಲೀಷನ್ನು ಪಾಸುಮಾಡುವುದಿಲ್ಲ. ಇಂಗ್ಲೀಷಲ್ಲಿ ಫೇಲಾದಾಗ ಅವರಿಗೆ ನಾವು




ನಾನೆಷ್ಟು ಭಾರ ಹೊರಲಿ ?

ದಡ್ಡರು ಅನಿಸುತ್ತದೆ. ಅವರ ಧೈರ್ಯ ಮುರಿದುಹೋಗುತ್ತದೆ. ಇಂಗ್ಲೀಷನ್ನು ಎಲ್ಲರೂ ಕಲಿಯಬೇಕು ಎಂಬುದನ್ನು ಕಾನೂನು ಎಂಬಂತೆ ಪಾಲಿಸುವ ಅಗತ್ಯವೇನು?

ಎಲ್ಲರೂ ಯಾಕೆ ಇಂಗ್ಲೀಷು ಕಲಿಯಬೇಕು? ನಮಗೆ ಇಷ್ಟವಿಲ್ಲದ ಭಾಷೆಯನ್ನು ಯಾಕೆ ಕಲಿಯಬೇಕು? ಹೀಗೆಂದು ಕುವೆಂಪು ಕೇಳುತ್ತಾರೆ. ಇಂಗ್ಲೀಷು ಕೆಲವರು ಮಾತ್ರ ಕಲಿಯಬೇಕಾದ ಭಾಷೆ. ಇಷ್ಟ ಇರುವವರು ಮಾತ್ರ ಕಲಿಯಬೇಕಾದ ಭಾಷೆ. ಎಲ್ಲರೂ ಕಲಿಯಬೇಕಾದ ಭಾಷೆ ಅಲ್ಲ. ಕೆಲವರು ಕಲಿಯಬೇಕಾದ ಭಾಷೆಯನ್ನು ಎಲ್ಲರೂ ಕಲಿಯಬೇಕು ಎನ್ನುವುದು ತಪ್ಪು. ಇಂಗ್ಲೀಷ್ ಫೇಲಾದ ಮಕ್ಕಳು ಪ್ರಾಣ ಕಳೆದುಕೊಂಡಿದ್ದಾರೆ. ಇದು ನೋವಿನ ವಿಷಯ.

ಹಾಗಾದರೆ ಇಂಗ್ಲೀಷು ನಮ್ಮ ದೇಶದಲ್ಲಿ ಇರಲೇಬಾರದೇ? ಕುವೆಂಪು ಇಂಗ್ಲೀಷನ್ನು ಹೀಗೆ ವಿರೋಧಿಸುವುದಿಲ್ಲ. ಬಿಳಿಯರು ದೇಶ ಬಿಟ್ಟು ಹೋದರು. ಅದೇ ತರ ಅವರ ಭಾಷೆ ಕೂಡ ಹೋಗಬೇಕು ಎನ್ನಲಿಲ್ಲ. ಖಂಡಿತ ಇಂಗ್ಲೀಷ್ ನಮಗೆ ಬೇಕು. ಅದರ ಒಳಗಿರುವ ತಿಳುವಳಿಕೆ ಬೇಕು ಎಂದರು. ಆದರೆ ಅದಕ್ಕಾಗಿ ಇಂಗ್ಲೀಷನ್ನು ಎಲ್ಲರೂ ಕಲಿಯಬೇಕಿಲ್ಲ. ಕಲಿಯಲೂ ಬಾರದು. ಕೆಲವರು ಮಾತ್ರ ಕಲಿತರೆ ಸಾಕು. ಆ ಕೆಲವರು ಚೆನ್ನಾಗಿ ಕಲಿಯಬೇಕು. ಅದರ ಒಳಗಿನ ಅರಿವನ್ನು ಉಳಿದವರಿಗೆ ಕೊಡಬೇಕು.

ಗಾಂಧಿ ಕೂಡ ಹೀಗೆ ಹೇಳಿದರು. ನೋವಿನ ಮಾತು ಎಂದರೆ ಗಾಂಧಿಯ ಕನಸು, ಕುವೆಂಪು ಕನಸು ಇನ್ನೂ ಕನಸಾಗೇ ಇರುವುದು.

ಇಂಗ್ಲಿಷ್ ಕಲಿತರೆ ಬೇರೆ ದೇಶಕ್ಕೆ ಹೋಗಬಹುದು. ಬೇರೆ ದೇಶದಲ್ಲಿ ಕೆಲಸ ಮಾಡಬಹುದು. ಹೀಗೆಂದು ಕೆಲವರು ಹೇಳುತ್ತಾರೆ. ಆದರೆ ಬೇರೆ ದೇಶಕ್ಕೆ

ಹೋಗುವವನು ಒಬ್ಬ. ಅದಕ್ಕಾಗಿ ತೊಂಬತ್ತೊಂಬತ್ತು ಜನ ಯಾಕೆ ಇಂಗ್ಲೀಷ್‌ನ್ನು ಕಲಿಯಲೇಬೇಕು? ಎಂದು ಕುವೆಂಪು ಕೇಳುತ್ತಾರೆ.

## ಮೂರು ಬೇಡ, ಎರಡು ಸಾಕು

ಈಗ ಶಾಲೆಗಳಲ್ಲಿ ಮೂರು ಭಾಷೆ ಕಲಿಸುತ್ತಾರೆ. ಕನ್ನಡ, ಇಂಗ್ಲೀಷು, ಹಿಂದಿ. ಕುವೆಂಪು ಇದನ್ನು ಒಪ್ಪುವುದಿಲ್ಲ. ಹಿಂದಿಯನ್ನು ಯಾಕೆ ಕಲಿಯಬೇಕು? ಎಂದು ಕೇಳುತ್ತಾರೆ. ಕಾರಣ, ಹಿಂದಿಯನ್ನು ಜೀವನದಲ್ಲಿ ನಾವು ಬಳಸುವುದೇ ಇಲ್ಲ. ಕಲಿಸುವುದಾದರೆ ಎರಡೇ ಭಾಷೆ ಕಲಿಸಲಿ. ಮೂರು ಬೇಡ. ಇಷ್ಟ ಇಲ್ಲದಾಗ ಒಂದು



ಭಾಷೇನ ಕಲಿಸಬಾರದು. ಬಲವಂತವಾಗಿ ಕಲಿಸಿದರೆ ಪ್ರೀತಿ ಹುಟ್ಟದು. ದ್ವೇಷ ಹುಟ್ಟುತ್ತದೆ. ಕಲಿವ ವಿಷಯದಲ್ಲಿ ಆರಿಸಿಕೊಳ್ಳುವ ಹಕ್ಕು ಇರಬೇಕು.

## ವಿಶ್ವಮಾನವ ಸಂದೇಶ

ಎಲ್ಲ ಮಕ್ಕಳೂ ಹುಟ್ಟುವಾಗ ವಿಶ್ವಮಾನವರೇ ಆಗಿರುತ್ತಾರೆ. ಅಂದರೆ ಅವಕ್ಕೆ ಜಾತಿ-ಮತ ಇರುವುದಿಲ್ಲ. ಇದು ನನ್ನ ಕುಲ ಎಂಬ ಭಾವನೆ ಇರುವುದಿಲ್ಲ. ಅವು ಕೇವಲ ಮಕ್ಕಳಾಗಿರುತ್ತವೆ. ಲೋಕಕ್ಕೆ ಸೇರಿದ ಜೀವ ಆಗಿರುತ್ತವೆ. ಗೆರೆ ಬೀಳದ ಗಾಜಿನಂತೆ ಇರುತ್ತವೆ ಅವು.

ಆದರೆ ಆ ಮಗು ಬೆಳೆದಂತೆ ಅಲ್ಪಮಾನವ ಆಗುತ್ತದೆ. ತನ್ನ ಜಾತಿ ಇದು. ಇದು ತನ್ನ ಧರ್ಮ. ತನ್ನ ಕುಲ ಇದು ಎಂದು ಗೊತ್ತಾಗುತ್ತದೆ. ಇನ್ನೊಂದು ಧರ್ಮ-ಜಾತಿ ಬಗ್ಗೆ ಅದು ಕೆಟ್ಟ ಭಾವನೆ ಬೆಳೆಸಿಕೊಳ್ಳುತ್ತದೆ. ಮೇಲು ಜಾತಿಯಲ್ಲಿ ಹುಟ್ಟಿದರೆ ಅಹಂಕಾರ ಬೆಳೆಸಿಕೊಳ್ಳುತ್ತದೆ. ಅದರ ಆಕಾಶದ ಅಗಲದ ಮನಸ್ಸು, ಅಂಗೈ ಅಗಲಕ್ಕೆ ಕುಗ್ಗುತ್ತದೆ. ಗೆರೆಬಿದ್ದ ಗಾಜಿನಂತೆ ಆಗುತ್ತದೆ.

ಈ ದುರಂತ ಯಾಕೆ? ಯಾಕೆಂದರೆ ಮಕ್ಕಳನ್ನು ಬೆಳೆಸುವ ನಮ್ಮ ಸಮಾಜ ಹಾಗಿದೆ. ಸಮಾಜದ ನಂಬಿಕೆಗಳು ಹಾಗಿವೆ. ಮಗುವಿಗೆ ನಿನ್ನ ಜಾತಿ ಇದು ಎಂದು ಹೇಳಲಾಗುತ್ತದೆ. ನಿನ್ನ ಮತ ಇದು, ನಿನ್ನ ಭಾಷೆ ಇದು ಎಂದು ತಿಳಿಸಲಾಗುತ್ತದೆ. ಬೆಳೆದ ಮೇಲೆ ಮಗು ಇದರಿಂದ ಬೇರೆಯವರನ್ನು ಪ್ರೀತಿಸುವುದಿಲ್ಲ.

ಹುಟ್ಟುವಾಗ ವಿಶ್ವಮಾನವ ಆಗಿದ್ದ ಮಗು ಬೆಳೆದು ಅಲ್ಪಮಾನವ ಆಯಿತಲ್ಲ. ಈ ಅಲ್ಪ ಮಾನವನನ್ನು ಮತ್ತೆ ವಿಶ್ವಮಾನವ ಮಾಡಬೇಕು. ಅದಕ್ಕಾಗಿ ಕುವೆಂಪು ಐದು ಮಂತ್ರಗಳನ್ನು ಹೇಳಿದ್ದಾರೆ. ಏಳು ಸೂತ್ರಗಳನ್ನು ಕೊಟ್ಟಿದ್ದಾರೆ :

## ಐದು ಮಂತ್ರಗಳು

೧ ಎಲ್ಲ ಮನುಷ್ಯರಿಗೂ ಒಂದೇ ಮತ ಇರಬೇಕು – ಅದು ಮನುಜ ಮತ.

೨ ಎಲ್ಲರಿಗೂ ಒಂದೇ ದಾರಿ ಇರಬೇಕು – ಅದು ವಿಶ್ವಪಥ.

೩ ಲೋಕದಲ್ಲಿ ಕೆಲವರಿಗೆ ಮಾತ್ರ ಒಳ್ಳೆಯದು ಆಗಬಾರದು. ಎಲ್ಲರಿಗೂ ಒಳಿತು ಆಗಬೇಕು. – ಅದು ಸರ್ವೋದಯ.

೪ ಬಾಳಿನಲ್ಲಿ ಒಂದು ಇನ್ನೊಂದನ್ನು ವಿರೋಧಿಸಬಾರದು. ಒಂದು ಇನ್ನೊಂದರ ಜತೆ ಬೆರೆಯಬೇಕು – ಅದು ಸಮನ್ವಯ.

೫ ಬದುಕನ್ನು ನೋಡುವ ನಮ್ಮ ನೋಟದಲ್ಲಿ ಕೊರತೆ ಇರಬಾರದು – ಅದು ಪೂರ್ಣದೃಷ್ಟಿ.

## ಏಳು ಸೂತ್ರಗಳು

೧ ಎಲ್ಲಾ ಮನುಷ್ಯರು ಒಂದೇ.

೨ ಹಿಂದು-ಮುಸ್ಲಿಂ ಎಂಬ ಭೇದ ನಾಶ ಆಗಬೇಕು.

೩ ಮೇಲು-ಕೀಳು ಮಾಡುವ ಜಾತಿಗಳು ನಾಶ ಆಗಬೇಕು.

೪ ಮತಭೇದಗಳು ಇಲ್ಲವಾಗಬೇಕು.

೫ ಎಲ್ಲರಿಗೂ ಒಂದೇ ಮತ ಇರಬೇಕು. ಎಲ್ಲರ ದಾರಿಯೂ ಒಂದೇ ಆಗಬೇಕು.

೬ ಆದರೆ ತಮಗೆ ಸರಿ ಅನಿಸಿದ್ದನ್ನು ಆರಿಸಿಕೊಳ್ಳುವ ಹಕ್ಕು ಇರಬೇಕು.

೭ ಒಂದು ಪುಸ್ತಕದ ಮಾತು ಕೊನೆ ಆಗಬಾರದು. ಒಬ್ಬರು ಹೇಳಿದ ಮಾತೇ ಕೊನೆ ಆಗಬಾರದು.

## ಕುವೆಂಪು ಅವರ ಕೆಲವು ನುಡಿಗಳು



೧ ಗುಡಿ ಚರ್ಚು, ಮಸೀದಿಗಳ ಬಿಟ್ಟು ಹೊರಬನ್ನಿ
ಬಡತನವ ಬುಡಮುಟ್ಟ ಕೀಳ ಬನ್ನಿ

೨ ದೇವರ ಗುಡಿಯಲಿ ಪೂಜಾರಿಯೆ ನಿವಾಸಿ, ದೇವರೆ ಪರದೇಶಿ!

೩ ನೂರು ದೇವರನೆಲ್ಲ ನೂಕಾಚೆದೂರ
ಭಾರತಾಂಬೆಯೆ ದೇವಿ ನಮಗಿಂದು ಪೂಜಿಸುವ ಬಾರ

೪ ಬಡಬಗ್ಗರ ಗುಡಿಸಲುಗಳ ಮುರಿದು
ಗುಡಿಗಳ ಕಟ್ಟುವರು ಏನಗಾಗಿ



ಗುಡಿಸಲು ಕಿತ್ತು ದೇಗುಲ ನೆಡುವರು

೫ ವಿಚಾರವಿಲ್ಲದ ಬುದ್ಧಿಯು ಸತ್ತ ಬುದ್ಧಿಯೇ ಸರಿ

೬ ಮಾನವನೆ ದೇವತೆಯು, ನರನೆ ನಾರಾಯಣನು

೭ ಯಾವ ಕಾಲದ ಶಾಸ್ತ್ರ ಏನು ಹೇಳಿದರೇನು?
ಎದೆಯ ದನಿಗೂ ಮಿಗಿಲು ಶಾಸ್ತ್ರ ಇಹುದೇನು?

೮ ಹಳೆಮತದ ಕೊಳೆಯೆಲ್ಲ
ಹೊಸಮತಿಯ ಹೊಳೆಯಲ್ಲಿ ಕೊಚ್ಚಿಹೋಗಲಿ

೯ ವಿಚಾರವಾದಿ ಆದವನಿಗೆ ಯಾವಾಗಲೂ ತೆರೆದ ಮನಸ್ಸು ಇರಬೇಕು

೧೦ ವಿದ್ಯೆ ಸಾಮಾನ್ಯ ಮನುಷ್ಯನನ್ನು ಪ್ರಾಣಿತನದಿಂದ ಮೇಲಕ್ಕೆ ಎತ್ತುತ್ತದೆ

೧೧ ಅನ್ನ ಬಟ್ಟೆಗಳನ್ನು ಸಂಪಾದಿಸುವುದು ಮಾತ್ರ ವಿದ್ಯೆಯ ಗುರಿಯಲ್ಲ

೧೨ ಎಲ್ಲಾದರೂ ಇರು ; ಎಂತಾದರೂ ಇರು
ಎಂದೆಂದಿಗೂ ನೀ ಕನ್ನಡವಾಗಿರು

೧೩ ಇನ್ನು ಮುಂದೆ ಇಂಗ್ಲೀಷು ಹಲವರು ಕಲಿಯುವ ಭಾಷೆಯಲ್ಲ
ಕೆಲವರು ಕಲಿಯಬೇಕಾದ ಭಾಷೆ

೧೪ ಖಂಡಿತವಾಗಿಯೂ ನಮಗೆ ಇಂಗ್ಲೀಷ್ ಬೇಕು ; ಆದರೆ ಇಂಗ್ಲೀಷ್
ಮಾಧ್ಯಮ ಬೇಡ

೧೫ ಕನ್ನಡಕ್ಕಾಗಿ ಕೈಯೆತ್ತು;ನಿನ್ನ ಕೈ ಕಲ್ಪವೃಕ್ಷ ಆಗುತ್ತದೆ
ಕನ್ನಡಕ್ಕಾಗಿ ದನಿಯೆತ್ತು ; ನಿನ್ನ ದನಿ ಪಾಂಚಜನ್ಯ ಆಗುತ್ತದೆ

೧೬ ಕಚ್ಚಾಡುವರನು ಕೂಡಿಸಿ ಒಲಿಸು
ಒಟ್ಟಿಗೆ ಬಾಳುವ ತೆರದಲಿ ಹರಸು

೧೭ ಕುಲದ ಹೆಮ್ಮೆ, ನೆಲದ ಹೆಮ್ಮೆ ಎಲ್ಲ ಮಾಯೆ

೧೮ ಕಷ್ಟವಿದ್ದರೂ ಸರಿಯೇ, ಇರಲಿ ಸ್ವಾತಂತ್ರ್ಯ

೧೯ ಮುಂದುವರಿವುದೆ ಬಾಳು ; ಹಿಂದೆ ಸರಿವುದೆ ಸಾವು

೨೦ ಸರ್ವರಿಗೆ ಸಮಪಾಲು ; ಸರ್ವರಿಗೆ ಸಮಬಾಳು

೨೧ ಕತ್ತಿ ಪರದೇಶಿಯಾದರೆ ಮಾತ್ರ ನೋವೆ?

ನಮ್ಮವರೆ ಹದವಾಗಿ ತಿವಿದರೆ ಅದು ಹೂವೆ ?

## ಕುವೆಂಪು ಅವರ ಕೆಲವು ಪ್ರಮುಖ ಕವನಗಳ ಆಯ್ದ ಭಾಗಗಳು

ಹಿಂದಿನಾ ಋಷಿಗಳೂ ಮಾನವರೆ ನಮ್ಮಂತೆ
ಅವರ ಶಾಸ್ತ್ರವು ಅವರ ಕಾಲಕ್ಕೆ ಮಾತ್ರ
ಕಾಲಕ್ಕೆ ತಕ್ಕಂತೆ, ದೇಶಕ್ಕೆ ತಕ್ಕಂತೆ
ನಮ್ಮ ಹೃದಯವೆ ನಮಗೆ ಶ್ರೀ ಧರ್ಮಸೂತ್ರ

* * *

ಹೋಗುತಿದೆ ಹಳೆಕಾಲ, ಹೊಸಕಾಲ ಬರುತಲಿದೆ,

ಬರುತಲಿದೆ ಹೊಸದೃಷ್ಟಿ ಹೊಸ ಬಯಕೆಗಳಲಿ.

ಹೋಗುತಿದೆ ಹಳೆಬಾಳು, ಹೊಸಬಾಳು ಬರುತಲಿದೆ,

ಬರುತಲಿದೆ ಕುದಿಗೊಂಡು ತರುಣರೆದೆಗಳಲಿ

* * *

ಇಂದು ನೆತ್ತರು ಚೆಲ್ಲಿ ಮುಂದೆ ಬಹ ಮಕ್ಕಳಿಗೆ

ಹೊಟ್ಟೆಗನ್ನವ, ಮೈಗೆ ಬಟ್ಟೆಯನು ನೀಡಿ

ಇಂದು ನೋವಾದರೂ ಇಂದು ಸಾವಾದರೂ

ಮುಂದೆ ಬಾಳಿಗೆ ಸೊಗಸು ನೆಮ್ಮದಿಯಮಾಡಿ.

* * *



ದೇವರು ಸೆರೆಯಾಳ್,ದೇಗುಲ ಸೆರೆಮನೆ

ದೇವರು ಸೆರೆಯಾಳ್, ದೇಗುಲ ಸೆರೆಮನೆ
ಕಾವಲು ಪೂಜಾರಿ

* * *

ಸಾಯುತಿದೆ ನಿಮ್ಮನುಡಿ, ಓ ಕನ್ನಡದ ಕಂದರಿರ
ಹೊರನುಡಿಯ ಹೊರೆಯಿಂದ ಕುಸಿದು ಕುಗ್ಗಿ!
ರಾಜನುಡಿಯೆಂದೊಂದು, ರಾಷ್ಟ್ರ ನುಡಿಯೆಂದೊಂದು,
ದೇವರನುಡಿಯೆಂದೊಂದು ಹತ್ತಿ ಜಗ್ಗಿ.

* * *

ಕಲ್ಲಿನ ಗೋಪುರ, ಕಲ್ಲಿನ ಗೋಡೆ . . .
ಸೆರೆಯನು ತಪ್ಪಿಸಿಕೊಳ್ಳದ ತರದಲಿ
ಅರ್ಚಕರಕ್ಷೆಯಿದೆ.
ತೆಂಗಿನಕಾಯೊಳ ತಲೆಯನು ಬಡಿಯುವ ಪೂಜೆಯ ಶಿಕ್ಷೆಯಿದೆ.

ಕೊನೆಗಂಡಿತೊ ಓರ್ರೊರ್ವರ ಗರ್ವದ ಕಾಲ
ಇದು ಸರ್ವರ ಕಾಲ
ಮೇಲಿಲ್ಲವೊ ಕೀಳಿಲ್ಲವೊ
ಸರ್ವಸಮಾನದ ರಾಜ್ಯ
ಅಧ್ಯಕ್ಷನೊ ಸೇನಾನಿಯೊ
ಕಮ್ಮಾರನೊ ಚಮ್ಮಾರನೊ
ಕಾಯಕವೆಲ್ಲವು ಪೂಜ್ಯ.
* * *
ಸಾಮಾನ್ಯರೊ ನಾವು
ಓ ಬನ್ನಿಂ.
ನಿಲ್ ಇನ್, ದಿಟ್ಟಗೆ ನಿಲ್ ಇನ್ !
ಬಾಗಿದ ಸೊಂಟವ ನೆಟ್ಟಗಿಡು
ಬೆದರಿದ ಬೆನ್ನಂ ನೇರ್ ಮಾಡು
ನೆಲ ನೋಡುವ ಕಣ್ಣಂ ಮೇಲೆತ್ತಿ
ಅಭ್ಯಾಸಂ ಮರೆತಾ ತಲೆಯೆತ್ತಿ
ಎದುರಾಳಿಯ ಮೊಗ ನೋಡು.
* * *
ತಲೆಯ ಹೊರೆಯು ಇಳಿಯಲಿಲ್ಲ ;
ಎದೆಯ ಬೇನೆ ಅಳಿಯಲಿಲ್ಲ;
ಅಡಿಯ ಬೇಡಿ ಒಡೆಯಲಿಲ್ಲ;
ದುಡಿವ ದಾಸ್ಯ ಬಿಡಲೆ ಇಲ್ಲ ;
ನನ್ನ ಸುತ್ತ ಮುತ್ತ ಮುತ್ತಿ
ನಿಂತಿರುವರು ಕತ್ತಿಯೆತ್ತಿ;

ಅಂತು, ನಾನೆ ತಿಳಿಯೆನಂತೆ!
ನನಗೆ ಮುಕ್ತಿ ದೊರಕಿತಂತೆ!
ಎಂಥ ಮುಕ್ತಿಯೋ ?
ಇದು ಎಂಥ ಮುಕ್ತಿಯೋ!
ಶತಮಾನಗಳು ಬರಿಯ ಜಡಶಿಲೆಯ ಪೂಜಿಸಾಯ್ತು;
ಪಾವ್ಗಳಿಗೆ ಪಾಲೆರೆದು ಪೋಷಿಸಾಯ್ತು!
ಬಿಸಿಲು ಮಳೆ ಗಾಳಿ ಬೆಂಕಿಯನೆಲ್ಲ ಬೇಡಿಯಾಯ್ತು;
ದಾಸರನು ಪೂಜಿಸಿಯೆ ದಾಸ್ಯವಾಯ್ತು.

* * *

ಒಳ್ಳಿತಾಗುವುದೆಲ್ಲ !
ಬೇವು ತುದಿಯಲಿ ಬೆಲ್ಲ !
ಮುಂದೆ ನಡೆ, ತೀರ್ಥವಿಹುದೆಲ್ಲ, ಹಾದಿಗಳು ಕೂಡುವೆಡೆಯಲ್ಲಿ!
ಬೆಳ್ಳಗಿದೆ ಹಾಲಲ್ಲ ;
ಬಲ್ಲವನೆ ತಾ ಬಲ್ಲ;
ಕೇಳಯ್ಯ ನಾನೊಬ್ಬ ಮಲ್ಲನೀ ಜಗದ ಗರಡಿಯಲ್ಲಿ.

* * *

---

ನಮ್ಮ ಬಹುಸಂಖ್ಯಾತ ಸಮುದಾಯ ಅನಕ್ಷರಸ್ಥರೇ ಹೊರತು ಅವಿದ್ಯಾವಂತರಲ್ಲ. ನೃಪತುಂಗ ಹೇಳುವಂತೆ ಅವರು "ಚದುರರ್ ನಿಜದಿಂ ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್". ಅನುಭವದಲ್ಲಿ, ವಿವೇಕದಲ್ಲಿ, ವ್ಯವಹಾರದಲ್ಲಿ, ತಿಳುವಳಿಕೆಯಲ್ಲಿ ಆ ಜನ ಚದುರರು. ಹೀಗೆಂದು ಅವರನ್ನು ಅಕ್ಷರದಲಿತರನ್ನಾಗಿಯೂ ಉಳಿಸುವಂತಿಲ್ಲ. ಅವರಲ್ಲಿ ಅಕ್ಷರ ಕಲಿಯುವ ಸಾಮರ್ಥ್ಯವಿದೆ. ಕಲಿಸುವ ಹೊಣೆ ಸರ್ಕಾರಗಳ, ವಿಶ್ವವಿದ್ಯಾಲಯಗಳ ಮೇಲಿದೆ. ಈ ನಿಟ್ಟಿನಲ್ಲಿ ದೇಶದಾದ್ಯಂತ ಸಾಕ್ಷರತಾ ಆಂದೋಲನ ನಡೆಯುತ್ತಿದೆ. ಆದರೆ ಈ ಅಕ್ಷರ ಸಂಸ್ಕೃತಿಯ ಆಂದೋಲನದಲ್ಲಿ ಕಲಿತವರಿಗೆ ಮತ್ತು ಕಲಿಯುವವರಿಗೆ ಉತ್ತಮ ಗುಣಮಟ್ಟದ ಪುಸ್ತಕಗಳ ಅವಶ್ಯಕತೆ ಇದೆ. ಕಲಿತವರು ಮರೆಯದಂತೆ, ಕಲಿಕೆಯನ್ನು ಮುಂದುವರಿಸುವಂತೆ ನೋಡಿಕೊಳ್ಳುವುದು ಎಲ್ಲರ ಕರ್ತವ್ಯ.

ಕನ್ನಡ ವಿಶ್ವವಿದ್ಯಾಲಯವು ನಾಡಿನ ಹಲವು ವಿದ್ವಾಂಸರೊಂದಿಗೆ ಸೇರಿ ನಡೆಸಿದ ಒಂದು ಸಾಮೂಹಿಕ ಪ್ರಯತ್ನದ ಫಲವಾಗಿ ಈ ಪುಸ್ತಕ ರೂಪತಾಳಿದೆ. ನವಸಾಕ್ಷರರು ಈ ಪುಸ್ತಕವನ್ನು ಪ್ರೀತಿಯಿಂದ ಸ್ವೀಕರಿಸುತ್ತಾರೆಂದು ನಂಬಿದ್ದೇವೆ. ಈ ಯೋಜನೆಯ ಯಶಸ್ಸಿಗೆ ಕಾರಣರಾಗಿರುವ ಉನ್ನತ ಸಲಹಾ ಸಮಿತಿ ಹಾಗೂ ಸಂಪಾದಕ ಸಮಿತಿಯ ಸದಸ್ಯರಿಗೆ, ಲೇಖಕರಿಗೆ, ಕಲಾವಿದರಿಗೆ ಹಾಗೂ ಈ ಯೋಜನೆಯಲ್ಲಿ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ನಮ್ಮೊಡನೆ ಪಾಲ್ಗೊಂಡವರೆಲ್ಲರಿಗೂ ನಮ್ಮ ಹೃತ್ಪೂರ್ವಕವಾದ ವಂದನೆಗಳು. ನಮ್ಮ ವಿಶ್ವವಿದ್ಯಾಲಯದ ಮೇಲೆ ವಿಶ್ವಾಸವಿಟ್ಟು ಇಂತಹ ಒಂದು ಗುರುತರವಾದ ಯೋಜನೆಯನ್ನು ವಹಿಸಿಕೊಟ್ಟ ಲೋಕಶಿಕ್ಷಣ ಇಲಾಖೆಯ ನಿರ್ದೇಶಕರಾದ ಶ್ರೀ ಲೂಕೋಸ್ ವಲ್ಲತ್ತರೈ ಅವರಿಗೆ ನನ್ನ ಕೃತಜ್ಞತೆಗಳು. ಓದುಗರು ಈ ಪುಸ್ತಕದ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ತಿಳಿಸಿದರೆ ನಮ್ಮ ಪಠ್ಯಪುಸ್ತಕ ರಚನೆಗೆ ಉಪಯೋಗವಾಗುತ್ತದೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು

---